# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು: | ಶ್ರೀ ಕೆ.ಎ. ತಿಪ್ಪೇಸ್ವಾಮಿ, |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1294 |
| ಉತ್ತರಿಸ ಬೇಕಾದ ದಿನಾಂಕ: | 18.03.2020 |
| ಉತ್ತರಿಸುವ ಸಚಿವರು | ಶ್ರೀ ವಿ.ಸೋಮಣ್ಣ, ವಸತಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ವಿವಿಧ ಯೋಜನೆ ಅಡಿಯಲ್ಲಿ ವಸತಿ ರಹಿತ ಬಡವರಿಗೆ ಸೂರು ಒದಗಿಸುವ ಯೋಜನೆಯನ್ನು ಕೇಂದ್ರ ಮತ್ತು ರಾಜ್ಯ ಸಹಾಯಧನ ಅಡಿಯಲ್ಲಿ ಜಾರಿಗೊಳಿಸುತ್ತಿರುವುದು ನಿಜವೇ; ಹಾಗಿದ್ದಲ್ಲಿ, ಸಂಪೂರ್ಣ ಮಾಹಿತಿ ನೀಡುವುದು; | ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ವಿವಿಧ ಯೋಜನೆ ಅಡಿಯಲ್ಲಿ ವಸತಿ ರಹಿತ ಬಡವರಿಗೆ ಸೂರು ಒದಗಿಸಲು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ರಾಜ್ಯ ಸರ್ಕಾರದ ಯೋಜನೆಗಳು:<br>• ಬಸವ ವಸತಿ ಯೋಜನೆ<br>• ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ ಮತ್ತು ನಗರ)<br>• ವಾಜಪೇಯಿ ನಗರ ವಸತಿ ಯೋಜನೆ<br>• ಮುಖ್ಯಮಂತ್ರಿಗಳ ಒಂದು ಲಕ್ಷ ಬಹುಮಹಡಿ ಬೆಂಗಳೂರು ವಸತಿ ಯೋಜನೆ<br>• ದೇವರಾಜ್ ಅರಸು ವಸತಿ ಯೋಜನೆ (ಗ್ರಾಮೀಣ ಮತ್ತು ನಗರ)<br><br>ಕೇಂದ್ರ ಪುರಸ್ಕೃತ ಯೋಜನೆಗಳು:<br>• ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ)<br>• ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) |
| (ಆ) | ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದಲ್ಲಿ ಉಂಟಾಗಿರುವ ಆರ್ಥಿಕ ಬಿಕ್ಕಟ್ಟಿನಿಂದ ಮೇಲ್ಕಂಡ ಯೋಜನೆಗಳ ಅಡಿಯಲ್ಲಿ ಬರುವ ಲಕ್ಷಾಂತರ ಫಲಾನುಭವಿಗಳಿಗೆ ಕಳೆದ ಒಂದು ವರ್ಷದಿಂದ ಸಹಾಯಧನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಆರ್ಥಿಕ ಬಿಕ್ಕಟ್ಟಿನಿಂದ ಫಲಾನುಭವಿಗಳಿಗೆ ಸಹಾಯಧನ ಬಿಡುಗಡೆ ಮಾಡುವುದನ್ನು ತಡೆಹಿಡಿದಿರುವುದಿಲ್ಲ. ವಿವಿಧ ವಸತಿ ಯೋಜನೆಗಳಡಿ ಜುಲೈ 2019ರವರೆಗೆ ಜಿ.ಪಿ.ಎಸ್ ಭೌತಿಕ ಪ್ರಗತಿಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ಸರ್ಕಾರವು ಆಗಸ್ಟ್ ಮಾಹೆಯಲ್ಲಿ ವಿವಿಧ ವಸತಿ ಯೋಜನೆಗಳಡಿ ಅನುದಾನ ದುರ್ಬಳಕೆಯನ್ನು ತಡೆಹಿಡಿಯುವ ಉದ್ದೇಶದಿಂದ ದಿನಾಂಕ: 16.11.2019 ರ ಸರ್ಕಾರಿ ಆದೇಶದ ರೀತ್ಯಾ ಪ್ರಗತಿಯಲ್ಲಿರುವ ಹಾಗೂ ಅನುದಾನ ಬಿಡುಗಡೆಗೆ ಬೇಡಿಕೆ ಇರುವ ಮನೆಗಳನ್ನು Geo ಆಧಾರಿತ "Vigil App" ಮೂಲಕ ಪರಿಶೀಲಿಸಲು ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾಪಂಚಾಯತಿ ಮುಖ್ಯಕಾರ್ಯನಿರ್ವಹಣಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಸದರಿ ಸಮಿತಿಗಳ ವರದಿಗಳನ್ನು ಪರಿಶೀಲಿಸಿ, ಪ್ರಗತಿಗೆ ಅನುಗುಣವಾಗಿ ಫಲಾನುಭವಿಗಳ ಖಾತೆಗೆ ಸಹಾಯಧನವನ್ನು ಬಿಡುಗಡೆ ಮಾಡಲಾಗುತ್ತದೆ. |

| | | |
|---|---|---|
| (ಇ) | ನಿಗಮದಿಂದ ಸಹಾಯಧನ ಬಿಡುಗಡೆ ನಿರೀಕ್ಷಣೆಯಲ್ಲಿ ಫಲಾನುಭವಿಗಳು ಸಾಲ ಮಾಡಿಕೊಂಡಿದ್ದು, ತಾವು ವಾಸಿಸುತ್ತಿದ್ದ ಜೋಪಡಿ , ಗುಡಿಸಲುಗಳು ಮತ್ತು ಶೆಡ್ಡುಗಳನ್ನು ಕಿತ್ತು ಹಾಕಿಕೊಂಡು ಬೀದಿ ಪಾಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಸಹಾಯಧನವನ್ನು ಕಾಲಕಾಲಕ್ಕೆ ಬಿಡುಗಡೆ ಮಾಡಲಾಗುತ್ತಿದೆ. ಅದರಂತೆ 2,23,279 ಮನೆಗಳನ್ನು ವಿಜಿಲ್ ಆಪ್ ಮೂಲಕ ಪರಿಶೀಲಿಸಲು ಜಿಲ್ಲಾಧಿಕಾರಿಗಳಿಗೆ ಮತ್ತು ಮುಖ್ಯ ಕಾರ್ಯನಿರ್ವಾಹಕರಿಗೆ ನೀಡಿದ್ದು, ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ವರದಿ ಆಧಾರದ ಮೇಲೆ 39,733 ಫಲಾನುಭವಿಗಳಿಗೆ ಒಟ್ಟು ರೂ 183.72 ಕೋಟಿ ಬಿಡುಗಡೆ ಮಾಡಲಾಗಿದೆ. ಇನ್ನೂ 1,83,996 ಮನೆಗಳು ಪರಿಶೀಲನೆಗೆ ಬಾಕಿ ಇದ್ದು, ಈ ಮನೆಗಳಿಗೆ ಸುಮಾರು ರೂ.845.27 ಕೋಟಿ ಬಿಡುಗಡೆ ಬಾಕಿ ಇರುತ್ತದೆ. ಅನುದಾನ ನಿಗಮದಲ್ಲಿ ಲಭ್ಯವಿದ್ದು, ವರದಿ ಬಂದ ಕೂಡಲೇ ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಬಿಡುಗಡೆ ಮಾಡಲಾಗುವುದು. |
| (ಈ) | ಈ ಯೋಜನೆಗಳಡಿ ಮೂರು ತಿಂಗಳೊಳಗೆ ಮನೆ ನಿರ್ಮಾಣ ಮಾಡಬೇಕೆಂದು ವಿಧಿಸಿರುವ ಷರತ್ತು ಅಸಂಭದ್ದವಲ್ಲವೆ; ಇಂತಹ ಎಷ್ಟು ಪ್ರಕರಣಗಳಲ್ಲಿ ಮನೆ ಹಂಚಿಕೆಯನ್ನು ರದ್ದುಪಡಿಸಲಾಗಿದೆ; ಹೀಗೆ ರದ್ದುಪಡಿಸಿದ ಮನೆಗಳ ಹಂಚಿಕೆಯನ್ನು ಅದೇ ಗ್ರಾಮಪಂಚಾಯಿತಿ ಅಥವಾ ಅದೇ ತಾಲ್ಲೂಕಿನ ಬೇರೆ ಗ್ರಾಮ ಪಂಚಾಯಿತಿ ಮರು ನಿಗದಿಪಡಿಸಲಾಗಿದೆಯೇ; ಅಥವಾ ಬೇರೆ ತಾಲ್ಲೂಕು /ಜಿಲ್ಲೆಗೆ ವರ್ಗಾಯಿಸಲಾಗಿದೆಯೇ? (ಸಂಪೂರ್ಣ ಮಾಹಿತಿ ನೀಡುವುದು) | "**ಮನೆ**" ಮಾರ್ಗಸೂಚಿಯ ಪ್ರಕಾರ ಫಲಾನುಭವಿಯು ನಿಗಮದಿಂದ ಅನುಮೋದನೆಗೊಂಡು ಕಾಮಗಾರಿ ಆದೇಶ ಪತ್ರ ಪಡೆದ ಮೂರು ತಿಂಗಳೊಳಗಾಗಿ ಮನೆ ನಿರ್ಮಾಣ ಕಾಮಗಾರಿ ಪ್ರಾರಂಭ ಮಾಡಬೇಕಿರುತ್ತದೆ.<br><br>ಈ ಹಿನ್ನೆಲೆಯಲ್ಲಿ, ಕಳೆದ ಮೂರು ವರ್ಷಗಳಲ್ಲಿ ಸಾಕಷ್ಟು ಸಮಯಾವಕಾಶ ನೀಡಿದಾಗ್ಯೂ ಪ್ರಾರಂಭಗೊಳ್ಳದ ಮನೆಗಳನ್ನು ಬ್ಲಾಕ್ ಮಾಡಲಾಗಿತ್ತು. ಈ ಬಗ್ಗೆ ದಿನಾಂಕ 29.01.2020 ರಂದು ನಡೆದ ಸಚಿವ ಸಂಪುಟದ ಉಪಸಮಿತಿ 2ನೇ ಸಭೆಯಲ್ಲಿ ಬಸವ ವಸತಿ ಯೋಜನೆ, ವಾಜಪೇಯಿ ನಗರ ವಸತಿ ಯೋಜನೆ, ಡಾ.ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆಗಳಡಿಯಲ್ಲಿ ವಿವಿಧ ಕಾರಣಗಳಿಂದ ಬ್ಲಾಕ್ ಆಗಿರುವ ಎಲ್ಲಾ ಮನೆಗಳನ್ನು ಅನ್ ಬ್ಲಾಕ್ ಮಾಡಿ ಒಂದು ತಿಂಗಳು ಕಾಲಾವಕಾಶ ನೀಡಿ ಈ ಅವಧಿಯಲ್ಲಿ ಪ್ರಾರಂಭಗೊಳ್ಳುವ ಮನೆಗಳನ್ನು ಜಿಪಿಎಸ್ ಗೆ ಅಳವಡಿಸಿ ಪ್ರಗತಿಗೆ ಪರಿಗಣಿಸಿಕೊಳ್ಳಲು ಸೂಚಿಸಲಾಗಿದೆ.<br><br>ಅದರಂತೆ ಬ್ಲಾಕ್ ಮಾಡಲಾದ 2,55,344 ಫಲಾನುಭವಿಗಳ ಮನೆಗಳನ್ನು ಅನ್ ಬ್ಲಾಕ್ ಮಾಡಿ ವಾಸ್ತವವಾಗಿ ಪ್ರಾರಂಭಿಸಿರುವ ಫಲಾನುಭವಿಗಳ ಮನೆಗಳನ್ನು ಜಿ.ಪಿ.ಎಸ್.ಗೆ ಅಳವಡಿಸಲು ಕ್ರಮ ವಹಿಸಲಾಗುತ್ತಿದ್ದು, ಪ್ರಸ್ತುತ ಈ ಅವಕಾಶವನ್ನು 31/03/2020ರವರೆಗೆ ವಿಸ್ತರಿಸಲಾಗಿದ್ದು, ಅರ್ಹ ಫಲಾನುಭವಿಗಳು ಈ ಅವಕಾಶವನ್ನು ಬಳಸಿಕೊಳ್ಳಬಹುದಾಗಿದೆ. ಸದರಿ ಮನೆಗಳ ಗುರಿಯನ್ನು ಅದೇ ಗ್ರಾಮ ಪಂಚಾಯತಿ/ಬೇರೆ ಗ್ರಾಮ ಪಂಚಾಯತಿ ನಿಗದಿಪಡಿಸಿರುವುದಿಲ್ಲ ಅಥವಾ ಬೇರೆ ತಾಲ್ಲೂಕು/ಜಿಲ್ಲೆಗೆ ವರ್ಗಾವಣೆ ಮಾಡಿರುವುದಿಲ್ಲ. |

ವ ಇ 129 ಹೆಚ್ಎಂ 2020

(ವಿ. ಸೋಮಣ್ಣ)
ವಸತಿ ಸಚಿವರು